# ರೆಡ್ ಸಾಯಿಲ್ ಸ್ಪ್ರಿಂಗ್ | ಮಕ್ಕಳಿಗಾಗಿ ಒಂದು ಪರಿಸರ ಪತ್ರಿಕೆ

'ರೆಡ್ ಸಾಯಿಲ್ ಸ್ಪ್ರಿಂಗ್' ಎಂಬುದು 7–12 ವರ್ಷದ ಮಕ್ಕಳಿಗಾಗಿ ಆರಂಭಿಸಿದ ಪ್ರಕೃತಿಗೆ ಸಂಬಂಧಪಟ್ಟ ಮುದ್ರಿತ ಪತ್ರಿಕೆಯಾಗಿದೆ. ಇದರ ಪರಿಕಲ್ಪನೆಯು ಅಮೃತಾ ಪ್ರೀತಂ (ಸಹ ಸಂಸ್ಥಾಪಕರು ಹಾಗೂ ಪ್ರಧಾನ ಸಂಪಾದಕರು) ಹಾಗೂ ಸೆಂಧಿಲ್ ನಾಥನ್ (ಸಹ ಸಂಸ್ಥಾಪಕರು ಹಾಗೂ ಸೃಜನಶೀಲ ನಿರ್ದೇಶಕರು) ಅವರದಾಗಿದ್ದು, ಮಕ್ಕಳನ್ನು ನೈಸರ್ಗಿಕ ಪ್ರಪಂಚದೊಂದಿಗೆ ಬೆಸೆಯುವ ಆಶಯದೊಂದಿಗೆ ಭೂಗ್ರಹದ ಮೇಲೆ ಮನುಷ್ಯ ಹಾಗೂ ಪ್ರಕೃತಿ ಹೇಗೆ ಮತ್ತು ಯಾವ ರೀತಿಯಲ್ಲಿ ಜೀವಜಾಲವನ್ನು ರೂಪಿಸುತ್ತದೆ ಎಂಬುದನ್ನು ಸೋದಾಹರಣವಾಗಿ ವಿವರಿಸಲಾಗುತ್ತದೆ.

ಸೆಂಧಿಲ್ ನಾಥನ್ (ಎಸ್.ಎನ್) ಅವರು ಶೆಫಾಲಿ ತ್ರಿಪಾಠಿ ಮೆಹ್ತಾ (ಎಸ್.ಟಿ.ಎಂ) ಅವರೊಂದಿಗೆ ಇಲ್ಲಿ ಮಾತನಾಡಿದ್ದಾರೆ.







ಎಸ್.ಟಿ.ಎಂ: 'ರೆಡ್ ಸಾಯಿಲ್ ನೇಚರ್ ಪ್ಲೇ' ಮೊದಲು ಬಂದಿತು... ಹಾಗಾಗಿ ಅದರಿಂದಲೇ ಪ್ರಾರಂಭಿಸೋಣ. ಬೆಳೆಯುತ್ತಿರುವ ಮೆಟ್ರೋ ನಗರದ ಮಕ್ಕಳಿಗೆ ಪ್ರಕೃತಿಯ ಸಾಂಗತ್ಯವೇ ಅಪರೂಪವಾಗುತ್ತಿರುವ ಈ ಸಂದರ್ಭದಲ್ಲಿ ನೀವು ಸೃಷ್ಟಿಸಿರುವ ಈ ವಿಶಿಷ್ಟ ಅವಕಾಶಕ್ಕೆ ಸ್ಫೂರ್ತಿ ಏನು?

ಎಸ್.ಎನ್: ಮಕ್ಕಳ ಆಟಕ್ಕೆ ಅಗತ್ಯವಾದ ನೈಸರ್ಗಿಕ ಪರಿಸರವನ್ನು ನಗರ ಪ್ರದೇಶಗಳು ಹೊಂದಿಲ್ಲ ಎಂಬುದನ್ನು ನಾವು ಪೋಷಕರಾದಾಗಲೇ ಅರಿತುಕೊಂಡೆವು. ಇಲ್ಲಿ ಮಕ್ಕಳಿಗೆ ಮರ ಹತ್ತಲು ಅವಕಾಶವಿಲ್ಲ, ಹುಲ್ಲಿನ ಇಳಿಜಾರಲ್ಲಿ ಉರುಳುವ ಅನುಭವವಿಲ್ಲ.. ಮರಗಳಲ್ಲಿ ಗೂಡು ಕಟ್ಟುವುದಕ್ಕಾಗಲಿ, ಇರುವೆಗಳ ಸಾಲನ್ನು ಹಿಂಬಾಲಿಸುವ ಖುಷಿಯಾಗಲಿ ಇಲ್ಲವೇ ಇಲ್ಲ! ಮಕ್ಕಳ ರಜೆ ಹಾಗೂ ಮನರಂಜನಾ ಚಟುವಟಿಕೆಗಳು ಏನಿದ್ದರೂ  ಒಂದು ಶಾಪಿಂಗ್ ಮಾಲ್ ಸುತ್ತುವುದು, ಇಲ್ಲವೇ ಮೊಬೈಲ್ ಫೋನ್ ಹಾಗೂ ವಿಡಿಯೋ ಗೇಮ್ಸ್ ಆಡುವುದೇ ಆಗಿದ್ದು ಇವುಗಳು ಮಕ್ಕಳಲ್ಲಿ ನಿಷ್ಕ್ರಿಯತೆ, ಹತಾಶೆ, ಆಕ್ರಮಣಶೀಲತೆಯಂತಹ ತಾಮಸ ಗುಣಗಳನ್ನು ಬೆಳೆಸುವಂತಾಗಿರುತ್ತವೆ. ನಿಸರ್ಗದ ಜೊತೆ ಕಾಲ ಕಳೆಯುವ ಖುಷಿಯಿಂದ ಅವರನ್ನು ನಾವು ವಂಚಿಸುತ್ತಿದ್ದೇವೆ. ವಿಷಾದವೆಂದರೆ, ಇದರಿಂದಾಗಿ ನಮ್ಮ ಭೂಮಿಯ ಬಗ್ಗೆ ಏನೇನೂ ಅರಿವಿಲ್ಲದ, ಶೂನ್ಯ ಜ್ಞಾನ ಹೊಂದಿರುವ ಪೀಳಿಗೆಯನ್ನು ನಾವು ಜಗತ್ತಿಗೆ ಕಾಣಿಕೆಯಾಗಿ ನೀಡುತ್ತಿದ್ದೇವೆ.

ನಗರದಲ್ಲಿ ನೈಸರ್ಗಿಕ ಪರಿಸರಗಳ ನಿರ್ಣಾಯಕ ಅಗತ್ಯವನ್ನು ನಾವು ಅರಿತುಕೊಂಡಂತೆ, 2016ರಲ್ಲಿ, 'ರೆಡ್ ಸಾಯಿಲ್ ನೇಚರ್ ಪ್ಲೇ' ಎಂಬ ನೈಸರ್ಗಿಕ ಆವಾಸಸ್ಥಾನವನ್ನು ಬೆಂಗಳೂರಲ್ಲಿ ಮಕ್ಕಳಿಗಾಗಿ ಅಭಿವೃದ್ಧಿಪಡಿಸಲು ತೀರ್ಮಾನಿಸಿದೆವು. ಇಲ್ಲಿ ಮಕ್ಕಳು ಪ್ರಕೃತಿಯಲ್ಲಿ ಬೆರೆತು, ಮೈಮರೆತು, ವಿಸ್ಮಯಗೊಂಡು, ಅನ್ವೇಷಣೆ ಮಾಡುತ್ತಾ, ಹೊಸ ವಿಷಯಗಳಿಗೆ ತೆರೆದುಕೊಳ್ಳುತ್ತಾ, ನಿಸರ್ಗದ ಜತೆ ಸಂಪರ್ಕ ಸಾಧಿಸುತ್ತಾ, ಖುಷಿಯನ್ನು ಅನುಭವಿಸುತ್ತಾರೆ.

ರೆಡ್ ಸಾಯಿಲ್ ನೇಚರ್ ಪ್ಲೇ. ಸುಮಾರು ಎರಡು ಎಕರೆ ವಿಸ್ತೀರ್ಣದಲ್ಲಿ, ಬೆಂಗಳೂರು ನಗರದಲ್ಲಿ ಪ್ರಕೃತಿ ಹಾಗೂ ಮಕ್ಕಳನ್ನು ಸೇರಿಸುವ ಮೊಟ್ಟಮೊದಲ ಪ್ರಕೃತಿ ಆಟದ ನೆಲೆವೀಡಾಗಿದೆ. ಬಂಜರು ಭೂಮಿಯೊಂದನ್ನು ದೇಶೀಯ/ಸ್ಥಳೀಯ ಮರಗಳನ್ನು ನೆಡುವ ಮೂಲಕ, ವಿವಿಧ ತರಕಾರಿಗಳು, ಧಾನ್ಯಗಳು, ಗಿಡಮೂಲಿಕೆಗಳು ಹಾಗೂ ಸಸ್ಯಗಳನ್ನು ವ್ಯಾಪಕವಾಗಿ ಬೆಳೆಸುವುದರ ಮೂಲಕ ಪುನಶ್ಚೇತನಗೊಳಿಸಲಾಯಿತು. ಇಲ್ಲಿನ ಪರಿಸರ ಸುಸ್ಥಿರವಾಗಿದ್ದು, ನಿರ್ಮಿಸಿರುವ ಕಟ್ಟಡಗಳೆಲ್ಲವೂ ನೈಸರ್ಗಿಕ ಕಟ್ಟಡ ಸಾಮಗ್ರಿಗಳಿಂದ ಮಾಡಲ್ಪಟ್ಟಿವೆ. ಮಳೆ ನೀರು ಕೊಯ್ಲು ಹಾಗೂ ಸಾವಯವ/ಮಿಶ್ರಗೊಬ್ಬರದಂತಹ ಸಾಂಪ್ರದಾಯಿಕ ಪದ್ಧತಿಗಳನ್ನೇ ಇಲ್ಲಿ ಅನುಸರಿಸಲಾಗುತ್ತಿದೆ.  ಎಳೆಯ ಮನಸ್ಸುಗಳು ಪ್ರಕೃತಿಯನ್ನು ಶಾಂತವಾಗಿ, ನಿರುಮ್ಮಳವಾಗಿ ಅನುಭವಿಸಲು, ಅನ್ವೇಷಿಸಲು ಇದು ಪ್ರೇರೇಪಿಸಿ, ಉದ್ದೀಪನಗೊಳಿಸಲು ಪ್ರಯತ್ನಿಸುತ್ತದೆ. ಇಲ್ಲಿ ಮಕ್ಕಳು ಮನಸೋಇಚ್ಛೆ ಓಡಬಹುದು, ಮರ ಹತ್ತಬಹುದು, ಬಂಡೆಕಲ್ಲುಗಳ ಮೇಲೆ ಜಿಗಿಯಬಹುದು, ನೀರಲ್ಲಿ ಮಣ್ಣಲ್ಲಿ ಆಡಬಹುದು, ಬಣ್ಣಬಣ್ಣದ ಚಿಟ್ಟೆಗಳನ್ನು, ಪಕ್ಷಿಗಳನ್ನು, ಜಲಸಸ್ಯಗಳನ್ನು ವೀಕ್ಷಿಸುತ್ತಾ... ಸುರಂಗಗಳೊಳಗೆ  ಓಡಬಹುದು!... ಮಕ್ಕಳ ಆಸಕ್ತಿಗನುಸಾರವಾಗಿ ಪ್ರಕೃತಿಯೊಂದಿಗೆ ಇಲ್ಲಿ ಆಟವಾಡಲು ಅನಂತ ಅವಕಾಶಗಳಿವೆ.

ಎಸ್.ಟಿ.ಎಂ: ರೆಡ್ ಸಾಯಿಲ್ ಸ್ಟ್ರಿಂಗ್... ಭಾರತದಲ್ಲೇ ಪ್ರಕೃತಿಗೆ ಸಂಬಂಧಪಟ್ಟ ಮೊಟ್ಟಮೊದಲ ಪತ್ರಿಕೆಯಾಗಿದೆ. ಇದರ ಹಿಂದಿನ ಆಲೋಚನೆ ಏನು?

ಎಸ್.ಎನ್ : ಕೋವಿಡ್ ಸಾಂಕ್ರಾಮಿಕ ಕಾಲದಲ್ಲಿ ರೆಡ್ ಸಾಯಿಲ್ ನೇಚರ್ ಪ್ಲೇ ತಾಣವನ್ನು ತಾತ್ಕಾಲಿಕವಾಗಿ ಮುಚ್ಚಬೇಕಾಯಿತು. ಆ ಸಮಯದಲ್ಲಿ ನಾವು ಮಕ್ಕಳಿಗೆ ಮತ್ತೆ ಪ್ರಕೃತಿಯ ವಿಸ್ಮಯಗಳನ್ನು ತೋರಲು ಪರ್ಯಾಯ ಮಾರ್ಗಗಳನ್ನು ಯೋಚಿಸುತ್ತಿರುವಾಗ ನಮಗೆ ಈ ಪತ್ರಿಕೆಯ ಆಲೋಚನೆ ಹೊಳೆಯಿತು.

ರೆಡ್ ಸಾಯಿಲ್ ಸ್ಟ್ರಿಂಗ್ ನಿಯತಕಾಲಿಕವು ನಮ್ಮ ಕಾರ್ಯದ ಮತ್ತೊಂದು ಮಾಧ್ಯಮವಾಗಿದ್ದು, ಇದು ನಮ್ಮ ಭೂಗ್ರಹದ ಬಗ್ಗೆ ವಿಶೇಷ ಜ್ಞಾನವನ್ನು ಮಕ್ಕಳಿಗೆ ಪ್ರಸ್ತುತಪಡಿಸುತ್ತದೆ. ಈ ನಿಯತಕಾಲಿಕದ ಮೂಲಕ ಮತ್ತಷ್ಟು ಹೆಚ್ಚಿನ ಮಕ್ಕಳನ್ನು ತಲುಪಲು ನಾವು ಉದ್ದೇಶಿಸಿದ್ದೇವೆ. ನಮ್ಮ ನಿಸರ್ಗ ಆಟದ ಪರಿಸರ, ರೆಡ್ ಸಾಯಿಲ್ ನೇಚರ್ ಪ್ಲೇ ಜನವರಿ 2022ರಿಂದ ಪುನರಾರಂಭಗೊಂಡಿದೆ ಹಾಗೂ ವೀಕ್ಷಣೆಗೆ ಮುಕ್ತವಾಗಿದೆ.

ಎಸ್.ಟಿ.ಎಂ:  ಮಕ್ಕಳು ಪ್ರಕೃತಿಯೊಂದಿಗೆ ಬೆರೆಯಲು, ಅನುಭವಿಸಲು ಹಾಗೂ ಅದರಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಳ್ಳುವ ಸಂಪರ್ಕ ಸೇತುವಾಗಿ ನೀವು ಇದನ್ನು ಕಂಡಿದ್ದೀರಿ, ಪ್ರಸ್ತುತ ಕಾಲಘಟ್ಟದಲ್ಲಿ ಹಿಂದೆಂದಿಗಿಂತಲೂ ಪ್ರಕೃತಿ ಸಂರಕ್ಷಣೆಯ ಉದ್ದೇಶ ಹಿರಿದಾಗಿದ್ದು, ಎಲ್ಲರ ಗಮನ ಇದರತ್ತ ಕೇಂದ್ರೀಕೃತವಾಗಬೇಕಿದೆ. ಪ್ರಳಯದ ಆತಂಕವನ್ನು ಸೃಷ್ಟಿಸದೆ ಅಪೇಕ್ಷಿತ ಪರಿಣಾಮವನ್ನು ಎಳೆಯ ಓದುಗರ ಮೇಲೆ ಬೀರಲು ಈ ಸಂದೇಶವು ಎಷ್ಟು ಸುಲಭ ಅಥವಾ ಕಷ್ಟಕರವಾಗಿದೆ?

ಎಸ್.ಎನ್:  'ರೆಡ್ ಸಾಯಿಲ್ ಸ್ಟ್ರಿಂಗ್' ಮಕ್ಕಳಿಗೆ ಪ್ರಕೃತಿಯನ್ನು ಹೇಗೆ ಗ್ರಹಿಸಬೇಕು, ತಮ್ಮ ಪರಿಸರವನ್ನು ಹೇಗೆ ಗೌರವಿಸಬೇಕು ಎಂಬುದರ ಬಗ್ಗೆ ಆಳವಾದ ಭದ್ರಬುನಾದಿಯನ್ನು ಒದಗಿಸುತ್ತದೆ. ರೆಡ್ ಸಾಯಿಲ್ ಸ್ಟ್ರಿಂಗ್ ಮುಂದಿನ ಪೀಳಿಗೆಯ ಮಕ್ಕಳನ್ನು ಸಮಾಜ ಪ್ರವರ್ತಕರಾಗಲು, ಈ ಭೂಮಿಯ ಪಾಲಕರಾಗಲು ಪ್ರೇರೇಪಿಸುತ್ತದೆ. ನಾವೆಲ್ಲರೂ ಜೀವಜಾಲದ ಮೂಲಕ ಪರಸ್ಪರ ಸಂಪರ್ಕ ಹೊಂದಿದ್ದು; ಈ ಪರಸ್ಪರ ಸಂಪರ್ಕವೇ ನಮ್ಮ ಜೀವನ ಇಲ್ಲಿ ಉಳಿಯುವಂತೆ ಮಾಡಿದೆ ಎಂಬ ಸಂದೇಶವನ್ನು ಮಕ್ಕಳೊಂದಿಗೆ ಹಂಚಿಕೊಳ್ಳಲು ಆಶಿಸುತ್ತೇವೆ.

ಎಸ್.ಟಿ.ಎಂ: ಪತ್ರಿಕೆಯನ್ನು ತೆರೆದ ಕೂಡಲೇ ಪ್ರತಿಯೊಬ್ಬರೂ ಗಮನಿಸುವ ಮೊದಲ ಅಂಶವೆಂದರೆ ಕಣ್ಣಿಗೆ ಎದ್ದುಕಾಣುವ ಪ್ರಕೃತಿ ಸೌಂದರ್ಯ ಮತ್ತು ಅದ್ಭುತಗಳನ್ನು ಮರುಸೃಷ್ಟಿಸಿದಂತೆ ಕಾಣುವ ಚಿತ್ರಗಳು ಹಾಗೂ ವಿವರಣೆಗಳು.

ಎಸ್.ಎನ್: ಹೌದು, ಪತ್ರಿಕೆ ಅತ್ಯಾಕರ್ಷಕವಾಗಿ ಕಾಣಬೇಕೆಂಬ ಉದ್ದೇಶದಿಂದಲೇ ನಾವು ಪ್ರಜ್ಞಾಪೂರ್ವಕವಾಗಿ ತೆಗೆದುಕೊಂಡಂತಹ ನಿರ್ಧಾರ ಇದು. ಈ ಜಗತ್ತಿಗೆ ಮಕ್ಕಳು ಖುಷಿ ಹಾಗೂ ಪ್ರೀತಿಯನ್ನು ತುಂಬಿಕೊಂಡು ಬರುತ್ತಾರೆ. ಅವರು ಮಾನಸಿಕವಾಗಿ ಸಿದ್ಧರಾಗಿದ್ದರೆ; ಅಂದರೆ ಪ್ರಕೃತಿಯ ಬಗ್ಗೆ ಮಾಹಿತಿ, ಜ್ಞಾನ ಹೊಂದಿದ್ದರೆ ಸಹಜವಾಗಿ ಈ ಭೂಮಿಯ ಪಾಲಕರಾಗಲು ಬಯಸುತ್ತಾರೆ.

ಎಸ್.ಟಿ.ಎಮ್: ಓದುವ ಸಂಸ್ಕೃತಿ ನಮ್ಮಲ್ಲಿ ಸಾಕಷ್ಟು ಕ್ಷೀಣಿಸುತ್ತಿದೆ ಎಂಬ ಅಂಶ ಗಮನದಲ್ಲಿರಿಸಿಕೊಂಡೇ ಈ ಪತ್ರಿಕೆಯನ್ನು ಹೊರತಂದಿದ್ದೀರಿ–ಈ ಸಂದರ್ಭದಲ್ಲಿ ಈ ಪತ್ರಿಕೆ ಹೆಚ್ಚು ಮಕ್ಕಳನ್ನು ತಲುಪುತ್ತದೆ ಎಂದು ಹೇಗೆ ನಿರೀಕ್ಷಿಸುತ್ತೀರಿ? ನೀವು ಶಾಲಾ ಗ್ರಂಥಾಲಯಗಳನ್ನು, ಓದುವ ಮಕ್ಕಳ ಗುಂಪುಗಳನ್ನು ತಲುಪುತ್ತಿದ್ದೀರಾ?

ಎಸ್.ಎನ್: ಕಣ್ಣಿಗೆ ಆಕರ್ಷಕವಾಗಿ ಕಾಣುವ ಚಿತ್ರಗಳು, ಆಸಕ್ತಿ ಕೆರಳಿಸುವ ವಿಷಯಗಳು ಇದ್ದಾಗ ಖಂಡಿತವಾಗಿಯೂ ಮಕ್ಕಳು ಬೇಡ ಅನ್ನದೇ ಓದಿಯೇ ಓದುತ್ತಾರೆ. ಈಗಷ್ಟೇ ಅಕ್ಷರ ಪ್ರಪಂಚಕ್ಕೆ ಕಾಲಿರಿಸಿ ಓದುವ ಹವ್ಯಾಸ ಆರಂಭಿಸಿರುವ ಮಕ್ಕಳನ್ನು ಈ ಪತ್ರಿಕೆಯು ಪ್ರೋತ್ಸಾಹಿಸುತ್ತದೆ. ವಿವಿಧ ಆಸಕ್ತಿದಾಯಕ ನಿರೂಪಣೆಗಳ ಮೂಲಕ ಅಂದರೆ ಕಥೆ, ಕವನಗಳ ಮೂಲಕ ಮಕ್ಕಳನ್ನು ತಲುಪಲು ನಮಗೆ ಸಹಾಯ ಮಾಡುತ್ತದೆ. ಕಲೆ ಹಾಗೂ ಚಿತ್ರಣಗಳು ಆಕರ್ಷಿಸುವುದರಿಂದ ಪ್ರಕೃತಿಗೆ ಸಂಬಂಧಪಟ್ಟ ಚಟುವಟಿಕೆಗಳಲ್ಲಿ ಮಕ್ಕಳು ತಮ್ಮ ಬಿಡುವಿನ ವೇಳೆಯಲ್ಲಿ ತೊಡಗಿಸಿಕೊಳ್ಳಬಹುದು. ಅವರು ತಾವು ನೋಡಿದ್ದನ್ನು ದಾಖಲಿಸಲು ದಿನಚರಿ ಪುಟಗಳನ್ನು ಕೂಡಾ ಹೊಂದಿದ್ದೇವೆ. ಹಾಗಾಗಿ ಇದು ಅವರ ಖಾಸಗಿ ಪ್ರಕೃತಿ ಪುಸ್ತಕವೂ ಆಗಿರುತ್ತದೆ. ಆತುರ ಪಡದೆ ನಿಧಾನಗತಿಯಲ್ಲಿ ಓದಬಹುದಾಗಿರುವುದರಿಂದ ಇದನ್ನು ಅವರಿಗೆ ಯಾರೂ ಕಲಿಸುವ ಅಗತ್ಯ ಬೀಳುವುದಿಲ್ಲ. ರೆಡ್ ಸಾಯಿಲ್ ಸ್ಟ್ರಿಂಗ್ ಕೇವಲ ಪತ್ರಿಕೆಯಲ್ಲ ಸಂಗ್ರಹಯೋಗ್ಯ ಅಮೂಲ್ಯ ವಸ್ತುವಾಗಿದೆ. ಪ್ರಸ್ತುತ, ನಾವು ಬಹಳಷ್ಟು ಶಾಲಾ ಗ್ರಂಥಾಲಯಗಳು ಹಾಗೂ ಓದುವ ಗುಂಪುಗಳನ್ನು ತಲುಪುತ್ತಿದ್ದೇವೆ. ಅವರಿಂದ ಉತ್ತಮ ಪ್ರತಿಕ್ರಿಯೆಗಳೂ ಬರುತ್ತಿವೆ.

ಎಸ್.ಟಿ.ಎಂ: ನೈಸರ್ಗಿಕ ಪರಿಸರವನ್ನು ಗ್ರಹಿಸುವುದರಲ್ಲಿ ಮೆಟ್ರೋ ಹಾಗೂ ದೊಡ್ಡ ನಗರಗಳಲ್ಲಿನ ಮಕ್ಕಳಿಗೂ, ಸಣ್ಣ ಪಟ್ಟಣಗಳು ಹಾಗೂ ಹಳ್ಳಿಯ ಮಕ್ಕಳಿಗೂ ಏನಾದರೂ ವ್ಯತ್ಯಾಸವಿದೆಯೆಂದು ನೀವು ಭಾವಿಸುತ್ತೀರಾ?. ಈ ಪತ್ರಿಕೆಯು ಕೇವಲ ಪಟ್ಟಣ/ಮಹಾನಗರಗಳಲ್ಲಿ ವಾಸಿಸುವ ಮಕ್ಕಳ ಮೇಲೆ, ಪ್ರಕೃತಿಯೊಂದಿಗಿನ ಒಡನಾಟ ಕಡಿಮೆ ಇರುವ ಮಕ್ಕಳನ್ನು ಮಾತ್ರ ಹೆಚ್ಚು ಕೇಂದ್ರೀಕೃತವಾಗಿಸಿಕೊಂಡು, ಸೀಮಿತಗೊಂಡಿದೆಯೇ?

ಎಸ್.ಎನ್: ಹೌದು, ಪ್ರಕೃತಿಯನ್ನು ಗ್ರಹಿಸುವ ವಿಷಯದಲ್ಲಿ ನಗರದ ಮಕ್ಕಳು ಹಾಗೂ ಹಳ್ಳಿಗಳ ಮಕ್ಕಳಲ್ಲಿ ಬಹಳಷ್ಟು ವ್ಯತ್ಯಾಸವಿದೆ. ನಗರಗಳಲ್ಲಿ ಪರಿಸರ ಮಾಲಿನ್ಯ, ವಾಹನ ದಟ್ಟಣೆ, ಕಾಂಕ್ರೀಟ್ ಕಟ್ಟಡಗಳು ದಿನೇದಿನೇ ಹೆಚ್ಚುತ್ತಿದ್ದು ಹಸಿರು ಕಾಣದಂತಾಗಿದೆ. ಬಹುತೇಕ ಶಾಲೆಗಳು ಚಿಕ್ಕದಾಗಿದ್ದು ಹೊರಾಂಗಣ ಪರಿಸರವೇ ಇಲ್ಲದಂತಾಗಿದೆ.

ಎಲ್ಲಾ ರೀತಿಯ ಪರಿಸರದಲ್ಲಿ ಬೆಳೆಯುವ ಮಕ್ಕಳಿಗಾಗಿ ಈ ಪತ್ರಿಕೆಯನ್ನು ರಚಿಸಲಾಗಿದೆ, ಅದು ನಗರ ಅಥವಾ ಹಳ್ಳಿ ಯಾವುದೂ ಆಗಿರಬಹುದು. ಹಳ್ಳಿಗಳಲ್ಲಿನ ಮಕ್ಕಳು ಹೆಚ್ಚು ಹಸಿರು ಸ್ಥಳಗಳನ್ನು ಹೊಂದಿದ್ದರೂ ಹವಾಮಾನ ಬದಲಾವಣೆಯಂತಹ ಸಮಸ್ಯೆಗಳ ಪ್ರಭಾವವು ಪ್ರಪಂಚದಾದ್ಯಂತ ಪ್ರತಿಯೊಬ್ಬರ ಮೇಲೆ ಸಮಾನ ಪರಿಣಾಮ ಬೀರುತ್ತದೆ. ಉದಾಹರಣೆಗೆ, ಒಂದು ವೇಳೆ ಅಮೆಜಾನ್ ಮಳೆ ಕಾಡುಗಳನ್ನು ಕತ್ತರಿಸಿ ನಾಶಗೈದರೆ, ಅದು ಭೂಮಿಯ ಉಷ್ಣತೆಯನ್ನು ಹೆಚ್ಚಿಸುತ್ತದೆ. ಧ್ರುವಗಳ ಮಂಜುಗಡ್ಡೆಗಳು ಕರಗಿದರೆ ಅನಗತ್ಯ ಪ್ರವಾಹಗಳು ಹಾಗೂ ಬರಗಾಲಗಳಿಗೆ ಕಾರಣವಾಗುತ್ತದೆ. ಅಥವಾ ತಾಳೆಎಣ್ಣೆಯ ಉತ್ಪಾದನೆಯು ಒರಾಂಗುಟನ್ಗಳು (ಕೋತಿ ಜಾತಿಗೆ ಸೇರಿದ ದೊಡ್ಡ ವಾನರ) ವಾಸಿಸುವ ಕಾಡುಗಳನ್ನು ನಾಶಪಡಿಸುತ್ತಿದೆ ಎಂದು ಮಕ್ಕಳಿಗೆ ತಿಳಿದಾಗ ಅವರು ಸದರಿ ಉತ್ಪನ್ನವನ್ನು ಖರೀದಿಸದೇ ಇರಲು ಪ್ರಜ್ಞಾಪೂರ್ವಕವಾಗಿ ನಿರ್ಧರಿಸುವ ಅವಕಾಶವಿದೆ. ಹಿರಿಯರಾಗಿ, ನೈಸರ್ಗಿಕ ಜಗತ್ತಲ್ಲಿ ಏನು ನಡೆಯುತ್ತಿದೆ ಎಂಬುದರ ಕುರಿತು ಮಕ್ಕಳಿಗೆ ತಿಳಿಸುವುದು ಹಾಗೂ ಉತ್ತಮ ಭವಿಷ್ಯವನ್ನು ಸೃಷ್ಟಿಸಲು ಅವರಿಗೆ ಅಗತ್ಯವಿರುವ ಜ್ಞಾನವನ್ನು ನೀಡುವುದು ನಮ್ಮ ಜವಾಬ್ದಾರಿಯಾಗಿದೆ.

ಎಸ್.ಟಿ.ಎಂ: ಶಾಲೆಗಳಲ್ಲಿ ಮಕ್ಕಳು ತಮ್ಮ ಪಠ್ಯಕ್ರಮದ ಭಾಗವಾಗಿ ಪ್ರಕೃತಿ ಹಾಗೂ ನೈಸರ್ಗಿಕ ಪ್ರಪಂಚದ ಬಗ್ಗೆ ವಿವಿಧ ವಿಷಯಗಳನ್ನು ಕಲಿಯುತ್ತಿದ್ದಾರೆ. ನಿಮ್ಮ ಪತ್ರಿಕೆಯು ಇದನ್ನು ಮೀರಿ ಹೇಗೆ ಸಾಗುತ್ತದೆ? ಎಳೆಯರನ್ನು ಓದಿನಲ್ಲಿ ತೊಡಗಿಸಲು ನೀವು ಯಾವ ಯಾವ ವಿಷಯಗಳನ್ನು ಆರಿಸಿಕೊಂಡಿದ್ದೀರಿ?

ಎಸ್.ಎನ್: ಶಾಲಾ ಪಠ್ಯಕ್ರಮ ಮೀರಿದ ಅನೇಕ ವಿಷಯಗಳು ಈ ಪತ್ರಿಕೆಯಲ್ಲಿವೆ. ಉದಾಹರಣೆಗೆ, ಪ್ರತಿ ಸಂಚಿಕೆಯಲ್ಲಿಯೂ ಒಂದು ದೇಶದ ಒಂದು ನಿರ್ದಿಷ್ಟ ಋತುವಿನ ಬಗ್ಗೆ ಕಥೆಯ ನಿರೂಪಣೆ ಇರುತ್ತದೆ. ಆ ಋತುವಿನ ಮೂಲಕ ಆ ದೇಶದಲ್ಲಿ ವಾಸಿಸುವ ಜನರ ಸಂಸ್ಕೃತಿ, ಆ ಸಮಯದಲ್ಲಿನ ಪ್ರಕೃತಿ ಬದಲಾವಣೆಗಳು, ಅವರ ಜೀವನಗಳು ಇತ್ಯಾದಿಗಳನ್ನು ತಿಳಿದುಕೊಳ್ಳುತ್ತಾರೆ. ವಿಶೇಷವಾಗಿ 'ಪ್ರಕೃತಿಯಲ್ಲಿ ಸಂಗೀತ' ಎಂಬ ಒಂದು ವಿಭಾಗವಿದ್ದು ಸುಂದರವಾದ ನಿರೂಪಣೆಯ ಮೂಲಕ ಇದನ್ನು ಪ್ರಸ್ತುತ ಪಡಿಸಲಾಗಿದೆ. ವಾಸ್ತವ ಅಂಕಿಅಂಶಗಳ ಜ್ಞಾನವನ್ನು ಮೀರಿ 'ರೆಡ್ ಸಾಯಿಲ್ ಸ್ಟ್ರಿಂಗ್' ಅನೇಕ ವಿಷಯಗಳನ್ನು ಸೃಜನಾತ್ಮಕವಾಗಿ ನೀಡುತ್ತದೆ.

ಪತ್ರಿಕೆಯ ವಿಷಯದ ಆಯ್ಕೆಯನ್ನು ಅದರ ಅರ್ಥ ಮತ್ತು ಉದ್ದೇಶಕ್ಕನುಗುಣವಾಗಿ ಶ್ರದ್ಧೆಯಿಂದ ಸಂಗ್ರಹಿಸಲಾಗಿದೆ. ಪತ್ರಿಕೆಯ ಮೊದಲ ಭಾಗವು ಭೂಮಿಯನ್ನು ಪರಿಶೋಧಿಸುತ್ತದೆ ಹಾಗೂ ಎರಡನೆಯ ವಿಭಾಗವು; 'ನಿಮ್ಮ ಸಹ–ನಿವಾಸಿಗಳನ್ನು ತಿಳಿದುಕೊಳ್ಳಿ' ಎಂಬ ಶೀರ್ಷಿಕೆಯೊಂದಿಗೆ ಪ್ರಾಣಿಗಳು, ಸಸ್ಯಗಳು ಹಾಗೂ ಅವುಗಳ ವಾಸಸ್ಥಾನಗಳನ್ನು ಪರಿಶೀಲಿಸುತ್ತದೆ.

ಮುಂದಿನ ವಿಭಾಗವು 'ಭೂಮಿಯೊಂದಿಗೆ ಸಂಪರ್ಕ ಸಾಧಿಸಿ' ಎಂಬುದಾಗಿದ್ದು ಇದು ಸುಸ್ಥಿರ ಜೀವನ ಕೌಶಲಗಳು, ಪ್ರಕೃತಿಕಲೆ ಮತ್ತು ಪ್ರಕೃತಿಯಲ್ಲಿ ತಲ್ಲೀನಗೊಳ್ಳುವ ಅನುಭವಗಳಿಗೆ ಸಂಬಂಧಿಸಿದ 'ನೀವೇ ಮಾಡಿ ನೋಡಿ' (ಡಿ.ಐ.ವೈ) ಪ್ರಕೃತಿ ಚಟುವಟಿಕೆಗಳನ್ನು ಪ್ರಸ್ತುತ ಪಡಿಸುತ್ತದೆ. ಉದಾಹರಣೆಗೆ, ನಮ್ಮ ಇತ್ತೀಚಿನ ಸಂಚಿಕೆ 'ರೆಡ್ ಸಾಯಿಲ್ ಸ್ಪ್ರಿಂಗ್–ಬ್ಲಾಸಮ್ಸ್' ಪತ್ರಿಕೆಯಲ್ಲಿ 'ಹೂವಿನಿಂದ ಚಹಾ ತಯಾರಿಸುವುದು', 'ಒಣ ಹೂಗಳು, ಎಲೆಗಳನ್ನು ಒತ್ತಿ ಕಲಾಕೃತಿ ರಚನೆ' ಹಾಗೂ 'ಪಕ್ಷಿ ವೀಕ್ಷಣೆ'ಯಂಥ ವಿಚಾರಗಳ ಬಗ್ಗೆ ವಿವರಣೆಗಳಿವೆ. ಕೊನೆಯದಾಗಿ 'ಪ್ರಕೃತಿಯನ್ನು ಸಂಭ್ರಮಿಸಿ' ವಿಭಾಗದಲ್ಲಿ 'ಪ್ರಕೃತಿಯಲ್ಲಿ ಸಂಗೀತ'ವನ್ನು ಆವಿಷ್ಕರಿಸುತ್ತದೆ. ಪ್ರಕೃತಿ ಕಥೆ, ಪ್ರಕೃತಿ ಕವನ ಹಾಗೂ ಪ್ರಕೃತಿ ಪದ ಹುಡುಕಾಟವನ್ನು ಹೊಂದಿದೆ. ಅಲ್ಲದೆ, ಪ್ರತಿ ತಿಂಗಳೂ ಓರ್ವ ಅಸಾಧಾರಣ ಪರಿಸರ ಪ್ರೇಮಿಯನ್ನು ಈ ಪತ್ರಿಕೆ ಪರಿಚಯಿಸುತ್ತಾ ಅವರು ತಮ್ಮ ಜೀವನ ಹಾಗೂ ಕಾರ್ಯಗಳಿಂದ ಹೇಗೆ ಈ ಜಗತ್ತನ್ನು ಉತ್ತಮ ಸ್ಥಳವನ್ನಾಗಿಸಿದ್ದಾರೆ ಎಂಬುದನ್ನು ವಿವರಿಸಲಾಗುತ್ತದೆ. ಜೊತೆಗೆ ಪ್ರತಿ ತಿಂಗಳು ಆಚರಿಸಬೇಕಾದ ಪ್ರಮುಖ ಪ್ರಕೃತಿ ದಿನಗಳ ಬಗ್ಗೆ ಕೂಡ ಒಂದು ವಿಭಾಗವಿದೆ.

ಮಕ್ಕಳ ಓದುವಿಕೆಗೆ ಸರಾಗವಾಗುವಂತೆ ವಿಷಯಗಳನ್ನು ರಚಿಸಲಾಗಿದ್ದು, ಇದರ ವಿನ್ಯಾಸವು ಮನಮೋಹಕವಾಗಿದೆ. ಮಕ್ಕಳ ಕಲ್ಪನೆಗೆ ರೆಕ್ಕೆ ಕಟ್ಟುವಂತೆ ಕಲೆ, ಚಿತ್ರಗಳಿದ್ದು ಅವರ ಕುತೂಹಲವನ್ನು ಕೆರಳಿಸುವಂತೆ ವಿವರಣೆಯನ್ನು ನೀಡಲಾಗಿದೆ.

> ಇದರ ವಿಷಯ ಹಾಗೂ ವಸ್ತು ಬಹಳ ಮಾಹಿತಿಪೂರ್ಣವಾಗಿದ್ದು ನನ್ನ 8 ವರ್ಷದ ಮಗುವಿಗೆ ಬಹಳಷ್ಟು ವಿಷಯಗಳ ಬಗ್ಗೆ ಕುತೂಹಲ ಮೂಡಿಸಿದೆ. ನನ್ನ ಇಬ್ಬರು ಮಕ್ಕಳೂ ವರ್ಣರಂಜಿತ ಪುಟಗಳು, ಮತ್ತು ಚಿತ್ರಗಳನ್ನು ತಿರುವು ಹಾಕುವುದನ್ನು ಆನಂದಿಸುತ್ತಾರೆ. ಅದನ್ನೇ ಮತ್ತೆ ಮತ್ತೆ ಓದುತ್ತಾರೆ !
>
> –ದೀಪಾ ಸ್ಯಾಮ್ (ತಾಯಿ)

> 'ರೆಡ್ ಸಾಯಿಲ್ ಸ್ಪ್ರಿಂಗ್'– ಪರಿಸರದ ಬಗ್ಗೆ ಬಂದಿರುವ ಹೊಸ ಮಕ್ಕಳ ಪತ್ರಿಕೆಯಾಗಿದ್ದು ಇದು ಎಲ್ಲ ವಯೋಮಾನದ ಜನರ ಕಲ್ಪನೆಯನ್ನೂ ಸೆರೆಹಿಡಿಯುತ್ತದೆ. ರೇಖಾಚಿತ್ರಗಳು, ವರ್ಣಚಿತ್ರಗಳು ಹಾಗೂ ಬೆರಗುಗೊಳಿಸುವ ಛಾಯಾಚಿತ್ರಗಳೊಂದಿಗೆ ಪ್ರತಿಯೊಂದನ್ನೂ ಸುಂದರವಾಗಿ ವಿವರಿಸಲಾಗಿದೆ.
>
> –ರಿಚರ್ಡ್ ಲೋವ್, 'ಲಾಸ್ಟ್ ಚೈಲ್ಡ್ ಇನ್ ದ ವುಡ್ಸ್' 'ಅವರ್ ವೈಲ್ಡ್ ಕಾಲಿಂಗ್' ಮುಂತಾದ ಪುಸ್ತಕಗಳ ಲೇಖಕರು

ಅನುವಾದ: **ಕೇಶವಚಂದ್ರ** | ಪರಿಶೀಲನೆ: **ನಾಗಮಣಿ ಎಸ್.ಎನ್.**